# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1218
2. ಮಾನ್ಯ ಸದಸ್ಯರ ಹೆಸರು : ಶ್ರೀ ಆರ್.ಬಿ.ತಿಮ್ಮಾಪುರ
3. ಉತ್ತರಿಸಬೇಕಾದ ದಿನಾಂಕ : 16.03.2021
4. ಉತ್ತರಿಸುವ ಸಚಿವರು : ಮಾನ್ಯ ಪೌರಾಡಳಿತ ಮತ್ತು ಸಕ್ಕರೆ ಸಚಿವರು

<table>
<tr><th>ಕ್ರ. ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>(ಅ)</td><td>ರಾಜ್ಯದ ರನ್ನ ಸಕ್ಕರೆ ಕಾರ್ಖಾನೆಯ ಕಳೆದ ಮೂರು ವರ್ಷಗಳ ವಾರ್ಷಿಕ ವಹಿವಾಟು ಎಷ್ಟು;</td><td>ರೈತರ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ರನ್ನನಗರ ಮುಧೋಳ್ ತಾಲ್ಲೂಕು, ಬಾಗಲಕೋಟೆ ಜಿಲ್ಲೆ ಈ ಕಾರ್ಖಾನೆಯ ಕಳೆದ ಮೂರು ವರ್ಷಗಳ ವಾರ್ಷಿಕ ವಹಿವಾಟು ಈ ಕೆಳಕಂಡಂತೆ ಇದೆ.<br><table><tr><th>ವರ್ಷ</th><th>ವಾರ್ಷಿಕ ವಹಿವಾಟು (ರೂ ಕೋಟಿಗಳಲ್ಲಿ)</th></tr><tr><td>2017-18</td><td>116.02</td></tr><tr><td>2018-19</td><td>92.25</td></tr><tr><td>2019-20</td><td>148.27</td></tr></table><br>ಕಾರ್ಖಾನೆ 2020-21ನೇ ಹಂಗಾಮಿನಲ್ಲಿ ಕಬ್ಬು ಅರೆಯುವ ಕಾರ್ಯವನ್ನು ನಿರ್ವಹಿಸಿರುವುದಿಲ್ಲ.</td></tr>
<tr><td>(ಆ)</td><td>ಈ ಕಾರ್ಖಾನೆಯಲ್ಲಿ ಯಾವ ಯಾವ ಉತ್ಪನ್ನಗಳನ್ನು ಉತ್ಪಾದಿಸಲಾಗುತ್ತಿದೆ;</td><td>ಕಾರ್ಖಾನೆಯು ಪ್ರಸ್ತುತ 5000 ಟಿಸಿಡಿ ಸಾಮರ್ಥ್ಯದ ಸಕ್ಕರೆ ಘಟಕ ಮತ್ತು 13 ಮೆ.ವ್ಯಾಟ್ ಸಾಮರ್ಥ್ಯದ ಸಹ ವಿದ್ಯುತ್ ಘಟಕವನ್ನು ಹೊಂದಿರುತ್ತದೆ. ಇದರ ಜೊತೆಗೆ ಕಬ್ಬಿನ ಪ್ರಾಥಮಿಕ ಉಪ ಉತ್ಪನ್ನಗಳಾದ ಕಬ್ಬಿನ ಸಿಪ್ಪೆ, ಕಾಕಂಬಿ, ಬಗ್ಯಾಸ್, ಪ್ರೆಸ್‌ಮಡ್ ಗಳನ್ನು ಸಹ ಉತ್ಪಾದಿಸಲಾಗುತ್ತಿದೆ.</td></tr>
<tr><td>(ಇ)</td><td>ರೈತರಿಗೆ ನೀಡಲು ಬಾಕಿ ಉಳಿಸಿಕೊಂಡಿರುವ ಹಣವೆಷ್ಟು?</td><td>ಕೇಂದ್ರ ಸರ್ಕಾರವು ನಿಗದಿಪಡಿಸಿರುವ ಎಫ್.ಆರ್.ಪಿ ದರದಂತೆ ಕಾರ್ಖಾನೆಯು ರೈತರ ಕಬ್ಬು ಬಿಲ್ಲು ಮೊತ್ತವನ್ನು ಪೂರ್ಣವಾಗಿ ಪಾವತಿಸಿರುತ್ತದೆ. ಆದ್ದರಿಂದ ಕಾರ್ಖಾನೆ ರೈತರಿಗೆ ಕೊಡಬೇಕಾದ ಬಾಕಿ ಉಳಿಸಿಕೊಂಡಿರುವುದಿಲ್ಲ.</td></tr>
</table>

ಸಂಖ್ಯೆ: ಸಿಐ 81 ಸಿಓಎಫ್ 2021

(ಎನ್. ನಾಗರಾಜು.ಎಂ.ಟಿ.ಬಿ.)
ಪೌರಾಡಳಿತ ಮತ್ತು ಸಕ್ಕರೆ ಸಚಿವರು.